ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಗುರುವಾರ, ದಿನಾಂಕ : 19 ನೇ ಮಾರ್ಚ್, 2020

KREDL ಗುತ್ತಿಗೆ ನೌಕರರನ್ನು ಖಾಯಂಗೊಳಿಸುವ ಕುರಿತು

ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ (ಪದವೀಧರರ ಕ್ಷೇತ್ರ) -

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) -

195 (1541+1540) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ (KREDL) ದಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದ 48 ನೌಕರರ ಪೈಕಿ ಎಷ್ಟು ನೌಕರರನ್ನು ಖಾಯಂಗೊಳಿಸಿ ಕಂಪನಿ ಸೇವೆಯಲ್ಲಿ ವಿಲೀನಗೊಳಿಸಲಾಯಿತು ;

(ಆ) ಈ ವಿಲೀನ ಪ್ರಕ್ರಿಯೆಯಿಂದ ಕೈಬಿಟ್ಟ ಉಳಿದ ಸಿಬ್ಬಂದಿಗಳನ್ನು ನಿಗಮದಲ್ಲಿ ವಿಲೀನಗೊಳಿಸಲು ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯವು ಯಾವ ದಿನಾಂಕದಂದು ಆದೇಶ ಹೊರಡಿಸಿದೆ ;

(ಇ) ಮಾನ್ಯ ಕರ್ನಾಟಕ ಉಚ್ಚನ್ಯಾಯಲಯದ ಆದೇಶ ಪರಿಪಾಲಿಸಲು ಇರುವ ತೊಂದರೆಗಳೇನು ;

(ಈ) ಈ ಕುರಿತು ಕಾನೂನು ಇಲಾಖೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ (KREDL) ವು ಸರ್ಕಾರದ ಅಧೀನದಲ್ಲಿ ಬರುತ್ತದೆಂದು 2 ಸಲ ಅಭಿಪ್ರಾಯ ವ್ಯಕ್ತ ಪಡಿಸಿರುವುದು ನಿಜವೇ ;

(ಉ) ಹಾಗಿದ್ದಾಗ್ಯೂ, ಕೂಡ ಉದ್ದೇಶಪೂರ್ವಕವಾಗಿ ವಿಲೀನ ಪ್ರಕ್ರಿಯೆಯನ್ನು ವಿಳಂಬಗೊಳಿಸಲು ಕಾರಣಗಳೇನು ;

(ಊ) ಕೈಬಿಟ್ಟ ಉಳಿದ ಸಿಬ್ಬಂದಿಯನ್ನು ವಿಲೀನಗೊಳಿಸಲು ಸರ್ಕಾರ ಹಾಕಿಕೊಂಡ ಕಾಲಮಿತಿ ಯಾವುದು?